

ಸಂಸ್ಥಾಪಕರು: ಪ್ರೊ ಎಂ.ವಿ. ಸೀತಾರಾಮಯ್ಯ



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಸಂಪುಟ: ೦೨ ಸಂಚಿಕೆ: ೦೩ | ಜೂನ್ ೨೦೧೫ | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್

Vol. 02 Issue 03 | June 2015 | Editor : Sri. B.R. Ravindranath





**ಚಂದಾ ವಿವರಗಳು**

ವಾರ್ಷಿಕ ಚಂದಾ
ರೂ. ೨೦/-

ಐದು ವರ್ಷಗಳ ಚಂದಾ
ರೂ. ೧೦೦/-



ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬-೦೫-೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯
ದೂರವಾಣಿ:
೨೬೬೧೫೪೭೭, ೨೬೬೭೬೭೭೩
ಇಮೇಲ್ : bmsritrust@gmail.com


## ಸೂವೆಂ ಅರಗ ಪ್ರಶಸ್ತಿ ಪ್ರದಾನ

ದಿನಾಂಕ 16-05-2015ರಂದು ಈ ವರ್ಷದ ಸೂವೆಂ ಅರಗ ಪ್ರಶಸ್ತಿಗೆ ಭಾಜನರಾದ ಪ್ರೊ. ಕೆ ಕೇಶವ ಶರ್ಮಾಅವರಿಗೆ ಖ್ಯಾತ ಸಾಹಿತಿ ಡಾ॥ ಎಚ್. ಎಸ್. ವೆಂಕಟೇಶಮೂರ್ತಿ ಪ್ರಶಸ್ತಿ ಪ್ರದಾನ ಮಾಡಿದರು.

ಪ್ರಶಸ್ತಿ ಪ್ರದಾನದ ನಂತರ ಮಾತನಾಡಿದ ಡಾ॥ ಎಚ್. ಎಸ್. ವೆಂಕಟೇಶಮೂರ್ತಿ ಅವರು ಪ್ರೊ. ಕೆ ಕೇಶವ ಶರ್ಮಾ ಅವರು ಕೈಗೊಂಡಿರುವ ಬಹಳ ಶ್ರಮದಾಯಕ ಜವಾಬ್ದಾರಿಯನ್ನು ಮೆಚ್ಚಿ ಅವರ ಗ್ರಂಥದಲ್ಲಿ ಒಳಗೊಂಡಿರುವ ಪರಿಕಲ್ಪನೆಗಳ ವೈವಿಧ್ಯತೆಗಳ ಬಗ್ಗೆ ಉದಾಹರಣೆ ಸಹಿತವಾಗಿ ವಿವರಿಸಿದರು. ಜೊತೆಗೆ ಪ್ರೊ. ಸೂವೆಂ ಅರಗ ಅವರ ಜೊತೆಗಿನ ತಮ್ಮ ಒಡನಾಟವನ್ನು ನೆನಪಿಸಿಕೊಂಡರು. ಈ ದತ್ತಿ ಪ್ರಶಸ್ತಿ ತೀರ್ಪುಗಾರರಾದ ಪ್ರೊ ಕೆ ಎಸ್ ಮಧುಸೂದನ ಅವರು ಪ್ರಶಸ್ತಿಗಾಗಿ ಬಂದಿದ್ದ ಅರ್ಜಿಗಳ ಬಗ್ಗೆ ವಿವರಿಸಿ ಒಟ್ಟು 26 ಅರ್ಜಿಗಳು ಬಂದಿದ್ದು ಅದರಲ್ಲಿ ಈ ಕೃತಿಯು ಶ್ರೇಷ್ಠ ಕೃತಿಯಾಗಿದ್ದ ಕಾರಣದಿಂದ ಆಯ್ಕೆ ಮಾಡುವಲ್ಲಿ ಹೆಚ್ಚು ಗೊಂದಲವಾಗಲಿಲ್ಲ ಎಂದು ಹೇಳಿದರು. ಜೊತೆಗೆ ನೂರು ಅರ್ಜಿಗಳು ಬಂದಿದ್ದರೂ ಬಹುಷಃ ಈ ಕೃತಿಯೇ ಆಯ್ಕೆಯಾಗುವ ಸಾಧ್ಯತೆಗಳು ಹೆಚ್ಚಿದ್ದವು ಎಂದು ಹೇಳಿ ಕೃತಿಯ ಮಹತ್ವವನ್ನು ಹೊಗಳಿದರು. ನಂತರ ಕೃತಿಯಲ್ಲಿನ ಕೆಲವು ವಿಶೇಷತೆಗಳ ಬಗ್ಗೆ ತಿಳಿಸಿಕೊಟ್ಟರು.



4ನೇ ಪುಟಕ್ಕೆ

# ಸಂಪಾದಕೀಯ

**ಹೊಂಗನಸು**

ಈ ವರ್ಷದ ಸರ್ವಸದಸ್ಯರ ಸಭೆಯನ್ನು 21ನೇ ಜೂನ್ 2015 ರಂದು ನಡೆಸಬೇಕೆಂದು ತೀರ್ಮಾನಿಸಲಾಗಿದೆ. 2013ರಲ್ಲಿ ಡಿಸೆಂಬರ್ ತಿಂಗಳಿನಲ್ಲಿ ಹೆಚ್ಚುವರಿ ಸಮಯದ ಅನುಮತಿ ಪಡೆದು ಸರ್ವಸದಸ್ಯರ ಸಭೆಯನ್ನು ನಡೆಸಲಾಗಿತ್ತು. 2014ರ ಸೆಪ್ಟೆಂಬರ್ ತಿಂಗಳಿನಲ್ಲಿ ನಿಗದಿತ ಕೊನೆಯ ದಿನಾಂಕದ ಒಳಗೆ ನಡೆಸಲಾಗಿತ್ತು. ಆದರೆ ಈ ವರ್ಷ ನಿಗದಿತ ಕೊನೆಯ ದಿನಾಂಕಕ್ಕಿಂತ ಮೂರು ತಿಂಗಳ ಮುಂಚೆಯೇ ನಡೆಸಲಾಗುತ್ತಿದೆ.ಈ ಕಳೆದ ಎರಡು ವರ್ಷಗಳಲ್ಲಿ ಪ್ರತಿಷ್ಠಾನದ ಆಡಳಿತ ದಕ್ಷತೆ ಹೆಚ್ಚಾಗಿದೆ ಎಂದು ನಂಬಬಹುದಲ್ಲವೇ.

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನದಲ್ಲಿ ಹಾಲಿ 626 ಸದಸ್ಯರಿರುತ್ತಾರೆ. ನಿಯಮಗಳ ಪ್ರಕಾರ ಎಲ್ಲಾ ಸದಸ್ಯರೂ ಗುರುತಿನ ಚೀಟಿಯನ್ನು ಹೊಂದಿರಬೇಕು ಹಾಗೂ ಸರ್ವ ಸದಸ್ಯರ ಸಭೆಯಲ್ಲಿ ಹಾಜರಾತಿ ತೋರಿಸಲು ಈ ಗುರುತಿನ ಕಾರ್ಡ್ ಕಡ್ಡಾಯವಾಗಿರುತ್ತದೆ. ಆ ಕಾರಣದಿಂದ ಎಲ್ಲಾ ಸದಸ್ಯರಿಗೂ ಗುರುತಿನ ಕಾರ್ಡ್ ಗಳನ್ನು ಪಡೆಯಲು ಈ ಹಿಂದೆ ಹಲವಾರು ಬಾರಿ ಕೋರಲಾಗಿರುತ್ತದೆ. ಬಹಳಷ್ಟು ಸದಸ್ಯರು ಈ ಕೋರಿಕೆಯನ್ನು ಮನ್ನಿಸಿ ಗುರುತಿನ್ ಕಾರ್ಡ್ ಗಳಿಗೆ ಅರ್ಜಿ ಸಲ್ಲಿಸಿದ್ದು ಸಂತೋಷದ ವಿಚಾರವಾದರೂ ಸಿದ್ದವಾಗಿರುವ ಗುರುತಿನ ಕಾರ್ಡ್‌ಗಳನ್ನು ಬಹಳಷ್ಟು ಸದಸ್ಯರು ಪಡೆದಿರುವುದಿಲ್ಲ ಹಾಗೂ ಗುರುತಿನ ಕಾರ್ಡ್ ಪಡೆಯ ಬೇಕಾದ ಸದಸ್ಯರ ಸಂಖ್ಯೆ ಕಡಿಮೆ ಏನಿಲ್ಲ. ಸಿದ್ದವಾಗಿರುವ ಗುರುತಿನ ಕಾರ್ಡ್ ಗಳನ್ನು ಪಡೆದುಕೊಳ್ಳಲು ಹಾಗೂ ಅರ್ಜಿಗಳನ್ನು ಸಲ್ಲಿಸಲು ಎಲ್ಲಾ ಸದಸ್ಯರನ್ನೂ ಈ ಮೂಲಕ ವಿನಂತಿಸಿಕೊಳ್ಳಲಾಗುತ್ತಿದೆ. ಎಲ್ಲರೂ ಆದಷ್ಟೂ ಬೇಗನೆ ಗುರುತಿನ ಕಾರ್ಡ್ ಪಡೆದು ಸಹಕರಿಸಬೇಕಾಗಿ ಕೋರುತ್ತೇವೆ.

ಹೊಂಗನಸು ವಾರ್ತಾಪತ್ರವು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸದಸ್ಯರು ಹಾಗೂ ಸಾಹಿತ್ಯಾಸಕ್ತರ ನಡುವೆ ಉತ್ತಮ ಮಾಧ್ಯಮವಾಗುವತ್ತ ಸಾಗುತ್ತಿದೆ. ಸದಸ್ಯರು ಹಾಗೂ ಸಾಹಿತ್ಯಾಸಕ್ತರ ಗಮನಕ್ಕೆ ತರಬೇಕಾದ ವಿಷಯಗಳನ್ನು ಹೊಂಗನಸು ಮಾಧ್ಯಮದ ಮೂಲಕ ತರುವ ಅವಕಾಶವನ್ನು ಎಲ್ಲಾ ಆಸಕ್ತರೂ ಪರಿಣಾಮಕಾರಿಯಾಗಿ ಬಳಸಿ ಕೊಳ್ಳಬೇಕೆಂದು ಕೋರುತ್ತೇವೆ.

ಬಿ. ಆರ್. ರವೀಂದ್ರನಾಥ್
ಸಂಪಾದಕರು

## ಜೂನ್ 2015ರಲ್ಲಿ ಆಯೋಜಿಸಲಾದ ಕಾರ್ಯಕ್ರಮಗಳು

**ಪ್ರತಿ ತಿಂಗಳೂ ಎರಡನೆಯ ಶನಿವಾರ ಸಂಜೆ 6–00 ಗಂಟೆಗೆ ಕಾರ್ಯಕ್ರಮ ಆರಂಭ**

**'ಅಕ್ಕರ ಗೊಟ್ಟಿ'ಯ ಜೂನ್ ತಿಂಗಳ ಕಾರ್ಯಕ್ರಮ**

**13–06–2015 ರಂದು ಸಂಜೆ 6–00 ಗಂಟೆಗೆ**

**'ಶಾ, ಬಾಲೂರಾವ್ ಮಾತಿನ ಮನೆ'ಯಲ್ಲಿ**

**ವಿಷಯ:**

**ಚಲದೊಳ್ ದುರ್ಯೋಧನಂ ನನ್ನಿಯೊಳಿನತಯಂ ಗಂಡಿನೊಳ್ ಭೀಮಸೇನಂ**
**ಬಲದೊಳ್ ಮದ್ರೇಶನತ್ಯುನ್ನತಿಯೊಳಮರ ಸಿಂಧೂದ್ಭವಂ ಚಾಪವಿದ್ಯಾ**
**ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್ ಫಲ್ಗುಣಂ ಧರ್ಮದೊಳ್ ನಿ**
**ರ್ಮಲಚಿತ್ತಂ ಧರ್ಮಪುತ್ರಂ ಮಿಗಿಲಿವರ್ಗಳಿನೀ ಭಾರತಂ ಲೋಕಪೂಜ್ಯಂ ॥**

**(ಪಂಪಭಾರತ. ಆಶ್ವಾಸ 14, ಪದ್ಯ 64)**

–ಎಂಬ ಪದ್ಯದ ಮೂಲ ಆಶಯ.

ಅಂದು ಚರ್ಚೆಯನ್ನು ಆರಂಭಿಸಲಿರುವವರು

ಡಾ। ಪಿ. ವಿ. ನಾರಾಯಣ.

ಆಸಕ್ತರು ದಯವಿಟ್ಟು ಭಾಗವಹಿಸಿ ಚಿಂತನ ಕಿಡಿಯನ್ನು ಹೊತ್ತಿಸಿ ವಿಚಾರದ ಬೆಳಕನ್ನು ಮಟಗೊಳಿಸಿ.

ಕನ್ನಡ ಸಂಸ್ಕೃತಿ ದರ್ಶನ ಸಾಕ್ಷ್ಯ ಚಿತ್ರ [illegible]

ಗುರುವಾರ 18ನೇ ಜೂನ್ 2015 ಸಂಜೆ ಆರು ಗಂಟೆಗೆ

**ಶ್ರೀ ಗೋವಿಂದ ಜಾಲೀಹಾಳ ಭಕ್ತಿ ಗೀತೆಗಳ ಗಾಯನ ಸ್ಪರ್ಧೆ**

ಭಾನುವಾರ 14ನೇ ಜೂನ್ 2015 ಬೆಳಗ್ಗೆ 10 ಗಂಟೆಗೆ

**ಶ್ರೀಮತಿ ಜಯಲಕ್ಷ್ಮಮ್ಮ ಬಾಪುರಾಮಣ್ಣ ದತ್ತಿ ನಿಧಿ ಕಾರ್ಯಕ್ರಮ**

ಬುಧವಾರ 24ನೇ ಜೂನ್ 2015 ಸಂಜೆಆರುಗಂಟೆಗೆ

ಉಪನ್ಯಾಸಕರು:

ಶ್ರೀ ಚಿ.ಸು. ಕೃಷ್ಣ ಶೆಟ್ಟಿ

ಹಿರಿಯಕಲಾವಿದರು, ಮಾಜಿಅಧ್ಯಕ್ಷರು, ಕರ್ನಾಟಕ ಲಲಿತ ಕಲಾ ಅಕಾಡೆಮಿ

**ವಿಷಯ: ಲಲಿತ ಕಲೆಗಳ ನಡುವಣ ಸಂಬಂಧ**

ಅಧ್ಯಕ್ಷತೆ :ಡಾ. ಪಿ.ವಿ. ನಾರಾಯಣ

**ಕುಂತಿ–ಕರ್ಣ ಗಮಕ ರೂಪಕ(ವೇಶಭೂಷಣ ಸಹಿತ)**

ನಡೆಸಿ ಕೊಡುವವರು:

ಶ್ರೀಮತಿ ಪದ್ಮಾಗುರುದತ್ ಮತ್ತುತಂಡದವರು

ಗುರುವಾರ 25ನೇ ಜೂನ್ 2015 ಸಂಜೆಆರುಗಂಟೆಗೆ

**ವಚನ ವಿಹಾರ**

**ಸಂಗೀತಾತ್ಮಕ ಸಾಕ್ಷ್ಯಚಿತ್ರ ಪ್ರದರ್ಶನ**

ಸೋಮವಾರ 29ನೇ ಜೂನ್ 2015 ಸಂಜೆ ಆರು ಗಂಟೆಗೆ

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಮೇ 2015 ತಿಂಗಳಿನಲ್ಲಿ ನಡೆದ ಕಾರ್ಯಕ್ರಮಗಳು

## 'ಅಕ್ಕರ ಗೊಟ್ಟಿ' (ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ)

ದಿನಾಂಕ 9-5-2015 ರಂದು ನಡೆದ 'ಅಕ್ಕರ ಗೊಟ್ಟಿ' (ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ)ಯ ಮೊದಲ ಕಾರ್ಯಕ್ರಮದಲ್ಲಿ ಪ್ರೊ. ಕೆ.ಎಸ್. ಮಧುಸೂದನ ಅವರು ಮೊದಲನೆಯ ನಾಗವರ್ಮನ 'ಕರ್ನಾಟಕ ಕಾದಂಬರಿ'ಯ 'ಎಲೆ !ತಾರಾಗಂ ಹರಂ ಕಣ್ಣಿಡೆ ಕರಗಿದುದು ಅಂತಲ್ತು ರುದ್ರಾಟ್ಟಹಾಸಂ ಜಲಮಾದತ್ತು .. " ಎಂದು ಮೊದಲಾಗುವ ಹಾಗೂ ಕುಮಾರವ್ಯಾಸನ 'ಹಲಗೆ ಬಳಪವ ಹಿಡಿಯದೊಂದಗ್ಗಳಿಕೆ ಪದವಿಟ್ಟಳುಪದೊಂದಗ್ಗಳಿಕೆ.. " ಎಂದು ಆರಂಭವಾಗುವ ಪದ್ಯಗಳನ್ನು ಮೂಲವಾಗಿರಿಸಿಕೊಂಡು ಕಾವ್ಯಾಭಿವ್ಯಕ್ತಿಯ ಎರಡು ರೀತಿಗಳನ್ನು ವಿವರಿಸಿದರು. ಮೊದಲನೆಯ ಪದ್ಯವು ಮಾರ್ಗ ಕಾವ್ಯದ - ಬರೆದು , ತಿದ್ದಿ, ತೀಡಿ ಅಂತಿಮಗೊಳಿಸುವ - ಬಗೆಗೆ ಉದಾಹರಣೆಯೆಂದೂ; ಎರಡನೆಯದು ಜಾನಪದಕ್ಕೆ ಸಮೀಪವಾದ ಸಹಜಸ್ಫುರಣೆಗೆ ನಿದರ್ಶನವೆಂದೂ ವಿವರಿಸಿದರು. ಜೊತೆಗೆ, ಬಸವಣ್ಣನ 'ತಾಳವಾನ ಸರಿಸವನರಿಯೆ' ಎಂದು ಮೊದಲಾಗುವ ವಚನವನ್ನೂ ಅವರು ನಿದರ್ಶನವಾಗಿ ನೀಡಿದರು. ಇದಕ್ಕೆ ಪ್ರತಿಕ್ರಿಯಿಸಿದ ಅನೇಕ ವಿದ್ವಾಂಸರು 'ಅಂತಲ್ತು' ಎಂಬ ಪದದಿಂದಾಗಿ ಕವಿ ತನ್ನ ಹಿಂದಿನ ಹೇಳಿಕೆಯನ್ನು ತಾನೇ ತಿರಸ್ಕರಿಸಿ ಮತ್ತೊಂದನ್ನು ಹೇಳುವುದು ಸೂಚಿತವಾಗುವುದಿಲ್ಲವೆಂದೂ, ಆದರೆ ಹಿಂದಿನ ಹೇಳಿಕೆಗಳನ್ನೂ ಉಳಿಸಿಕೊಳ್ಳುವುದರಿಂದಾಗಿ ಹೋಲಿಕೆಯನ್ನು ಮತ್ತಷ್ಟು ಪರಿಪೂರ್ಣಗೊಳಿಸುವ ಕ್ರಮವಿದೆಂದೂ ವಾದಿಸಿದರು.ಅಲ್ಲದೆ, ಚಳವಳಿಯೊಂದರ ಭಾಗವಾಗಿ ಬಂದ ಹಾಗೂ ಸಾಹಿತ್ಯೋದ್ದೇಶವಿಲ್ಲದ ವಚನಗಳನ್ನೂ ಹರಿದಾಸರ ಕೀರ್ತನೆಗಳನ್ನೂ ಸಾಂಪ್ರದಾಯಿಕ ಕಾವ್ಯಗಳ ಜೊತೆಗೆ ಹೋಲಿಸಬಾರದೆಂದೂ, ಅವನ್ನರಿಯಲು ಬೇರೊಂದು ಮೀಮಾಂಸೆಯ ಕ್ರಮದ ಆವಶ್ಯಕತೆಯಿದೆಯೆಂದೂ ವಾದಿಸಿದರು. ಹೀಗಾಗಿ ಈ ಚರ್ಚೆಯು ತುಂಬ ಉಪಯುಕ್ತವಾಗಿ ಚಿಂತನೆಗಳ ಕಡೆತದಿಂದ ಹೊಸ ಆಲೋಚನೆಗಳಿಗೆ ಎಡೆಗೊಟ್ಟಿತು.ಚರ್ಚೆಯಲ್ಲಿ



ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ವಿಜಯ ಸುಬ್ಬರಾಜ್, ಡಾ. ದೇವರ ಕೊಂಡಾರೆಡ್ಡಿ, ಡಾ. ಶಾಂಭವಿ, ಡಾ.ನಳಿನಿ ವೆಂಕಟೇಶ್, ಪ್ರೊ. ನೈಷಧಂ ಅಶ್ವತ್ಥನಾರಾಯಣ ಶಾಸ್ತ್ರಿ, ಡಾ.ಪಿ.ವಿ. ನಾರಾಯಣ ಮುಂತಾದವರು ಪಾಲ್ಗೊಂಡು ಕಾರ್ಯಕ್ರಮ ಯಶಸ್ವಿಯಾಗಲು ಸಹಕರಿಸಿದರು.

### ಧರ್ಮ ಮತ್ತು ರಾಜಕಾರಣ



ದಿನಾಂಕ 21ನೇ ಮೇ 2015 ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಎಂವಿಸಿ ಸಭಾಂಗಣದಲ್ಲಿ ಡಿವಿಜಿ ದತ್ತಿ ನಿಧಿ ಹಾಗೂ ಡಿಎಲ್ ಎನ್ ದತ್ತಿ ನಿಧಿಗಳ ಅಡಿಯಲ್ಲಿ ವಿಜಯವಾಣಿ ಮುಖ್ಯ ಉಪಸಂಪಾದಕರಾದ ಶ್ರೀ ಸೂರ್ಯಪ್ರಕಾಶ್ ಪಂಡಿತ್ ಅವರು ಧರ್ಮ ಮತ್ತು ರಾಜಕಾರಣ ವಿಷಯದ ಬಗ್ಗೆ ಉಪನ್ಯಾಸ ನೀಡಿದರು.ಧರ್ಮ ಮತ್ತು ರಾಜಕಾರಣ ವಿಷಯದ ಬಗ್ಗೆ ಡಿವಿಜಿಯವರ ಚಿಂತನೆಗಳನ್ನು ವಿಶ್ಲೇಷಿಸಿ ರಾಮಾಯಣ ಹಾಗೂ ರಘುವಂಶದ ಉಲ್ಲೇಖಗಳ ಸಹಿತ ರಾಜಕಾರಣದಲ್ಲಿ ಧರ್ಮ ಎಷ್ಟರಮಟ್ಟಿಗೆ ಆಳವಾದ ಪಾತ್ರ ವಹಿಸುತ್ತದೆ ಎಂದು ಸುದೀರ್ಘವಾಗಿ ವಿವರಿಸಿದರು.ಉದಾಹರಣೆ ಪೂರ್ವಕವಾಗಿ ನೀಡಿದ ಈ ಉಪನ್ಯಾಸ ಎಲ್ಲರನ್ನು ಚಿಂತನೆಗೊಳಪಡಿಸುವಷ್ಟು ಪರಿಣಾಮಕಾರಿಯಾಗಿತ್ತು.

ಅಧ್ಯಕ್ಷ ಭಾಷಣ ಮಾಡಿದ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷ ಡಾ. ಪಿವಿ. ನಾರಾಯಣ ಅವರು ಇಂದಿನ ರಾಜಕೀಯ ಪರಿಸ್ಥಿತಿಗೆ ತಕ್ಕ ಹಾಗೆ ಧರ್ಮ ಹೆಚ್ಚು ಪರಿಣಾಮಕಾರಿ ಪಾತ್ರ ವಹಿಸಬೇಕು ಹಾಗೂ ಆ ನಿಟ್ಟಿನಲ್ಲಿ ಇಂದಿನ ರಾಜಕೀಯ ನಾಯಕರು ಹಾಗೂ ಧರ್ಮ ಪ್ರಚಾರಕರು ಸಮಾಜದಲ್ಲಿ ಬದಲಾವಣೆಗಳನ್ನು ತರುವ ಅಗತ್ಯವಿದೆ ಎಂದು ಅಭಿಪ್ರಾಯ ಪಟ್ಟರು.

## ಹಸ್ತಪ್ರತಿ ವಿಭಾಗ

ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದಹಸ್ತಪ್ರತಿ ವಿಭಾಗವು ಸತತವಾಗಿ ಕಾರ್ಯನಿರತ ವಾಗಿರುತ್ತದೆ. ನಮ್ಮಲ್ಲಿರುವಅಪಾರ ಸಂಖ್ಯೆಯ ಹಸ್ತಪ್ರತಿಗಳಿಗೆ ಸಂಬಂಧಿಸಿದಂತೆ ಹಲವಾರು ಚಟುವಟಿಕೆಗಳನ್ನು ನಿರಂತರವಾಗಿ ನಡೆಸಿಕೊಂಡು ಬರಲಾಗುತ್ತಿದೆ. 2015ರ ಏಪ್ರಿಲ್ ಹಾಗೂ ಮೇ ತಿಂಗಳುಗಳಲ್ಲಿ 21 ಗ್ರಂಥಗಳ ಶುಷ್ಕ ಶುದ್ಧೀಕರಣ, 27 ಗ್ರಂಥಗಳಿಗೆ ತೈಲ ಲೇಪನಮತ್ತು ಮಸಿ ಲೇಪನ,33 ಗ್ರಂಥಗಳಲ್ಲಿ ಪತ್ರಗಳ ಜೋಡಣೆ, ಸ್ಕಾನ್ ಮಾಡಲು ಸಿದ್ಧಪಡಿಸಿರುವುದು, 12 ಗ್ರಂಥಗಳನ್ನು ಸ್ಕಾನ್ ಮಾಡಿರುವುದು, 59 ಗ್ರಂಥಗಳಿಗೆ ಸೂಚಿಗಳನ್ನು ತಯಾರಿಸಿರುವುದು, 26 ಗ್ರಂಥಗಳಿಗೆ ಅಟ್ಟೆಕಟ್ಟಿರುವುದು ಮತ್ತು13 ಗ್ರಂಥಗಳಿಗೆ ಬಟ್ಟೆಕಟ್ಟಿರುವುದು ಈ ಎಲ್ಲಾ ಕೆಲಸಗಳನ್ನು ಮಾಡಿರಲಾಗಿರುತ್ತದೆ. ಇಬ್ಬರುಸಿಬ್ಬಂದಿಗಳು ಹಾಗೂ ಕೆಲ ಸ್ವಯಂಪ್ರೇರಿತರ ಶ್ರಮದಿಂದ ಈ ಚಟುವಟಿಕೆಗಳನ್ನು ಸಾಧಿಸಲಾಗಿದೆ. ಮಾನ್ಯ ಸದಸ್ಯರಿಗೆ ತಿಳಿದಿರಬಹುದಾದಂತೆ ಹಸ್ತಪ್ರತಿಗಳಿಗೆ ಸಂಬಂಧಿಸಿದ ಚಟುವಟಿಕೆಗಳನ್ನು ಅತ್ಯುತ್ತಮ ರೀತಿಯಲ್ಲಿ ನಡೆಸುತ್ತಿರುವ ಸಂಸ್ಥೆಗಳ ಪೈಕಿ ನಮ್ಮ ಪ್ರತಿಷ್ಠಾನ ಒಂದು ಪ್ರಮುಖ ಸಂಸ್ಥೆಯಾಗಿರುತ್ತದೆ.

**ಪ್ರತಿ ತಿಂಗಳ ಸಿರಿಸಂಗೀತ**
**ದಿನಾಂಕ 30ನೇ ಮೇ 2015**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಪ್ರತಿ ತಿಂಗಳ ಸಿರಿಸಂಗೀತ ಕಾರ್ಯಕ್ರಮ ದಡಿಯಲ್ಲಿ ಶ್ರೀಮತಿ ಕೃತ್ತಿಕಾ ರಾಜನ್‌ಮತ್ತು ಸಂಗಡಿಗರು ಗೀತೆಗಳ ಗಾಯನ ನಡೆಸಿಕೊಟ್ಟರು.

## ಸಾಕ್ಷ್ಯಚಿತ್ರ ಪ್ರದರ್ಶನ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಹೊಸ ಕಾರ್ಯಕ್ರಮವಾದ ಈ ಕಾರ್ಯಕ್ರಮದಲ್ಲಿ ಎರಡನೇ ಕಾರ್ಯಕ್ರಮವನ್ನು 20ನೇ ಮೇ 2015 ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಇತ್ತೀಚೆಗೆ ಅಳವಡಿಸಲಾಗಿರುವ ನೂತನ ಪ್ರೊಜೆಕ್ಟರ್ ಮೂಲಕ "ಕರ್ನಾಟಕದ ಭಾಷೆಗಳು"ಹಾಗೂ "ಕನ್ನಡ ಒಂದು ದ್ರಾವಿಡ ಭಾಷೆ"ವಿಡಿಯೋ ಚಿತ್ರಗಳನ್ನು ಪ್ರದರ್ಶಿಸಲಾಯಿತು.ಬಹು ಜನರಿಗೆ ಅಪರಿಚಿತವಾದ ಹಲವಾರು ಆಸಕಿದಾಯಕ ವಿಷಯಗಳನ್ನು ಒಳಗೊಂಡ ಈ ಸಾಕ್ಷ್ಯಚಿತ್ರವು, ಬಹು ಸಂಖ್ಯೆಯಲ್ಲಿ ಬಂದಿದ್ದ ಸಭಿಕರನ್ನು ಬೆರಗುಗೊಳಿಸಿತು.

### ಬಿಎಂಶ್ರೀ ಕಲಾ ಭವನ

150 ಜನರಿಗೆ ಸ್ಥಳಾವಕಾಶ ಧ್ವನಿ, ಬೆಳಕು, ಪ್ರೊಜೆಕ್ಟರ್ ಸೌಲಭ್ಯಗಳು ಇರುವ ಬಿಎಂಶ್ರೀ ಕಲಾ ಭವನ ಸಾಹಿತ್ಯ –ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಲಭ್ಯವಿದೆ.ಉಪನ್ಯಾಸ, ವಿಚಾರಗೋಷ್ಠಿ, ಪುಸ್ತಕ ಬಿಡುಗಡೆ, ಕವಿಗೋಷ್ಠಿ, ಸಭೆ, ಸಂವಾದ, ಸಂಗೀತ, ನೃತ್ಯ, ಮುಂತಾದ ವೈವಿಧ್ಯಮಯ ಕಾರ್ಯಕ್ರಮಗಳಿಗೆ ಸಾಹಿತ್ಯಾಸಕ್ತರು, ಸಂಘ ಸಂಸ್ಥೆಗಳು ಪಡೆಯಬಹುದು. ವಿವರಗಳಿಗೆ ಪ್ರತಿಷ್ಠಾನದ ಕಚೇರಿಯನ್ನು ಸಂಪರ್ಕಿಸಿ.

**ಮೊದಲನೇ ಪುಟದಿಂದ**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣ ಅವರುಎಲ್ಲರನ್ನೂ ಸ್ವಾಗತಿಸಿ ಪ್ರಾಸ್ತಾವಿಕ ನುಡಿಗಳನ್ನು ಆಡಿ ಪ್ರೊ. ಸೂವೆಂ ಅರಗ ಅವರ ಸಾಧನೆಗಳನ್ನು ನೆನಪಿಸಿಕೊಂಡು ಅಂತಹ ಸಾಧಕರ ನೆನಪಿನಲ್ಲಿ ನೀಡುತ್ತಿರುವ ಈ ಪ್ರಶಸ್ತಿ ಶ್ರೀ ಕೇಶವ ಶರ್ಮಾ ಅವರಿಗೆ ಸಲ್ಲುತ್ತಿರುವುದು ಅರ್ಥಪೂರ್ಣ ಎಂದು ಅಭಿಪ್ರಾಯ ಪಟ್ಟರು. ಪ್ರೊ. ಸೂವೆಂ ಅರಗ ಅವರ ಪುತ್ರ ಶ್ರೀ ರಮೇಶ್ ಅವರು ಮಾತನಾಡಿ ಈ ಕಾರ್ಯಕ್ರಮವನ್ನು ನಡೆಸಿಕೊಡುತ್ತಿರುವ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನಕ್ಕೆ ವಂದನೆಗಳನ್ನು ತಿಳಿಸಿದರು.ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಖಜಾಂಚಿ ಶ್ರೀ ಎಂಎಸ್ ರಾಮಪ್ರಸಾದ್ ಅವರು ವಂದನಾರ್ಪಣೆ ಮಾಡಿದರು.ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಪ್ರೊ. ಅಬ್ದುಲ್ ಬಷೀರ್ ಕಾರ್ಯಕ್ರಮ ನಿರೂಪಣೆ ಮಾಡಿದರು.

**ಸೂವೆಂ ಅರಗ ಪರಿಚಯ**

ಜನನ : 2ನೇ ಜುಲೈ 1930.

ಸೇವೆ: ಕನ್ನಡ ಪ್ರಾಧ್ಯಾಪಕರು, ಸೈಂಟ್ ಜೋಸೆಫ್ ಕಾಲೇಜು, ಬೆಂಗಳೂರು

ಚಟುವಟಿಕೆಗಳು: ಕಾಲೇಜಿನ ಕನ್ನಡ ಸಂಘದ ಸ್ಥಾಪನೆ, ವಿದ್ಯಾರ್ಥಿಗಳಿಗಾಗಿ ಸ್ಪರ್ಧೆಗಳು, ಮಾರ್ಗದರ್ಶನ ಇತ್ಯಾದಿ

ಕೃತಿಗಳು: ಅವರು ನಿಧನರಾದ ನಂತರ ಪ್ರಕಟಗೊಂಡ ಮೂರು ಕೃತಿಗಳು ಅವರ ಸೃಜನ ಶೀಲ ಹಾಗೂ ವಿಮರ್ಶಾ ಸಾಮರ್ಥ್ಯಗಳಿಗೆ ಸಾಕ್ಷಿಯಾಗಿವೆ.

## ಸದಸ್ಯರ ಗಮನಕ್ಕೆ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ನಡೆಸುವ ಕಾರ್ಯಕ್ರಮಗಳ ವಿವರಗಳನ್ನು ಪ್ರತಿತಿಂಗಳೂ ಈ ಪತ್ರಿಕೆಯಲ್ಲಿ ಪ್ರಕಟಿಸಲಾಗುತ್ತದೆ ಹಾಗೂ ತಿಂಗಳ ಮೊದಲ ವಾರದಲ್ಲಿ ಎಲ್ಲಾ ಸದಸ್ಯರಿಗೂ ತಲುಪಿಸಲಾಗುತ್ತದೆ. ದಯವಿಟ್ಟು ಎಲ್ಲಾ ಸದಸ್ಯರೂ ಇದನ್ನೇ ಆಹ್ವಾನ ಪತ್ರಿಕೆಯೆಂದು ಪರಿಗಣಿಸಬೇಕು ಎಂದು ಕೋರಿಕೊಳ್ಳುತ್ತೇವೆ. ಇನ್ನು ಮುಂದೆ ಸದಸ್ಯರಿಗೆ ಪ್ರತ್ಯೇಕ ಆಹ್ವಾನ ಪತ್ರಿಕೆಗಳನ್ನು ಕಳುಹಿಸಲಾಗುವುದಿಲ್ಲ.

**ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನಡೆದ ಪ್ರಮುಖ ಕಾರ್ಯಕ್ರಮಗಳು ಈಗ ಯೂ ಟ್ಯೂಬ್ ನಲ್ಲಿ ಲಭ್ಯ**

ಸದಸ್ಯರು ಹಾಗೂ ವಿಶ್ವದಾದ್ಯಂತ ಇರುವ ಪ್ರತಿಷ್ಠಾನದ ಅಭಿಮಾನಿಗಳ ಅನುಕೂಲಕ್ಕಾಗಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನಡೆದ ಪ್ರಮುಖ ಕಾರ್ಯಕ್ರಮಗಳ ಧ್ವನಿ ಮುದ್ರಿತ ಉಪನ್ಯಾಸಗಳು ಹಾಗೂ ವಿಡಿಯೋಗಳನ್ನು ಜನಪ್ರಿಯ ಯೂ ಟ್ಯೂಬ್ ನಲ್ಲಿ ಅಳವಡಿಸಲಾಗಿದೆ. ಇವುಗಳನ್ನು ತಲುಪಲು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣ www.bmshri.orgಗೆ ಭೇಟಿ ನೀಡಿ.

## ಸೌಲಭ್ಯ ಕೇಂದ್ರ

ಬೆಂಗಳೂರಿನಲ್ಲಿ ಬಹಳಷ್ಟು ಹವ್ಯಾಸಿ ಅನುವಾದಕರು, ವೃತ್ತಿ ನಿರತ ಅನುವಾದಕರು ಹಾಗೂ ಉದಯೋನ್ಮುಖ ಬರಹಗಾರರಿಗೆ ಮೂಲಭೂತ ಸೌಲಭ್ಯಗಳ ಕೊರತೆ ಹಾಗೂ ಮಾರ್ಗದರ್ಶನದ ಕೊರತೆಗಳು ಇರುವುದನ್ನು ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ ಗುರುತಿಸಿರುತ್ತದೆ. ಆದ್ದರಿಂದ ಹವ್ಯಾಸಿ ಅನುವಾದಕರು, ವೃತ್ತಿ ನಿರತ ಅನುವಾದಕರು, ಉದಯೋನ್ಮುಖ ಬರಹಗಾರರು ಹಾಗೂ ಕನ್ನಡ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ ಒಂದು ಸೌಲಭ್ಯ ಕೇಂದ್ರವನ್ನು ಸ್ಥಾಪಿಸಲು ಉದ್ದೇಶಿಸಿರುತ್ತದೆ. ಈ ಸೌಲಭ್ಯ ಕೇಂದ್ರದಲ್ಲಿ ಅನುವಾದ ಹಾಗೂ ಬರವಣಿಗೆಗಳನ್ನು ಮಾಡಿಕೊಳ್ಳುವ ಮೂಲಭೂತ ಸೌಲಭ್ಯವನ್ನು ಕಲ್ಪಿಸಿಕೊಡಲಾಗುತ್ತದೆ ಹಾಗೂ ಕೋರಿಕೆ ಮೇರೆಗೆ ಹಿರಿಯ ಸಾಹಿತಿಗಳ ಮಾರ್ಗದರ್ಶನವ [illegible] ಲಭ್ಯವಿರುತ್ತದೆ. ಈ ಸೌಲಭ್ಯವನ್ನು ಬಳಸಿಕೊಂಡು ಹವ್ಯಾಸಿ ಅನುವಾದಕರು, ವೃತ್ತಿ ನಿರತ ಅನುವಾದಕರು, ಉದಯೋನ್ಮುಖ ಬರಹಗಾರರು ಹಾಗೂ ಕನ್ನಡ ವಿದ್ಯಾರ್ಥಿಗಳು ಹೆಚ್ಚಿನ ಗುಣಮಟ್ಟ ಸಾಧಿಸಲು ಅವಕಾಶವಿರುತ್ತದೆ.

ಆಸಕ್ತರು ಖಾಲಿ ಹಾಳೆಯಲ್ಲಿ ಅರ್ಜಿ ಬರೆದು ತಮ್ಮ ಸ್ವವಿವರದೊಂದಿಗೆ ಈ ಕೆಳಕಂಡ ವಿಳಾಸಕ್ಕೆ ಕಳುಹಿಸಬಹುದು.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ (ರಿ).
3ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ,
ಬೆಂಗಳೂರು–560019

ವಿವರಗಳಿಗೆ ಸಂಪರ್ಕಿಸಿ : ದೂರವಾಣಿ :080 26615877
ವೇಳೆ: ಮಧ್ಯಾಹ್ನ 1 ಗಂಟೆಯಿಂದ
ಸಂಜೆ 7 ಗಂಟೆಯವರೆಗೆ.

## ಕಾರ್ಯಕಾರಿ ಸಮಿತಿ ಸಭೆ

ದಿನಾಂಕ 23ನೇ ಮೇ 2015ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿ ಸಭೆ ನಡೆಯಿತು.ಈ ಸಭೆಯಲ್ಲಿ ಈ ವರ್ಷದ ಸರ್ವ ಸದಸ್ಯರ ಸಭೆಯನ್ನು ಭಾನುವಾರ 21ನೇ ಜೂನ್ 2015ರಂದು ಬೆಳಿಗ್ಗೆ 10.30ಗೆ ಕರೆಯಬೇಕೆಂಬ ನಿರ್ಧಾರವನ್ನು ಕೈಗೊಳ್ಳಲಾಯಿತು. ಹಾಗೆಯೇ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ಷಿಕ ವರದಿ, ಆಯವ್ಯಯ ಲೆಕ್ಕ ಇತ್ಯಾದಿ ವಿಷಯಗಳ ಬಗ್ಗೆ ಚರ್ಚೆಗಳನ್ನು ನಡೆಸಿ ಅನುಮೋದಿಸಲಾಯಿತು.

## ಸರ್ವ ಸದಸ್ಯರ ಸಭೆ

ಈ ವರ್ಷದ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸರ್ವ ಸದಸ್ಯರ ಸಭೆಯನ್ನು ಭಾನುವಾರ 21ನೇ ಜೂನ್ 2015ರಂದುಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಎಂವಿಸಿ ಸಂಭಾಗಣದಲ್ಲಿ ಬೆಳಿಗ್ಗೆ 10.30ಯಿಂದ ನಡೆಸಬೇಕೆಂದು ನಿರ್ಧರಿಸಲಾಗಿದೆ.

**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ (ರಿ.)**
ಎಂ.ವಿ.ಸೀ. ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ,
ನರಸಿಂಹರಾಜ ಕಾಲನಿ, ಬೆಂಗಳೂರು-೫೬೦ ೦೧೯
ದೂರವಾಣಿ: [illegible]

**[illegible] ಸರ್ವ ಸದಸ್ಯರ ಸಭೆಯ ತಿಳುವಳಿಕೆ ಪತ್ರ**

[illegible]

ಕಾರ್ಯಸೂಚಿ

[illegible]

ಕಾರ್ಯಕಾರಿ ಸಮಿತಿಯ ಅಪ್ಪಣೆಯ ಮೇರೆಗೆ

ಪ್ರೊ|| ಕೆ. ಅಬ್ದುಲ್ ಬಶೀರ್ — ಗೌರವ ಕಾರ್ಯದರ್ಶಿ
ಶ್ರೀ ಬಿ.ಆರ್. ರವೀಂದ್ರನಾಥ್ — ಗೌರವ ಕಾರ್ಯದರ್ಶಿ

ವಿಶೇಷ ಸೂಚನೆ

[illegible]

ಪ್ರತಿಷ್ಠಾನದ ಸದಸ್ಯರಿಗೆ ಮಾತ್ರ ಪ್ರವೇಶ

# ಶಾಶ್ವತ ನಿಧಿ

## ಸಾಹಿತ್ಯಾಸಕ್ತರಲ್ಲಿ ಒಂದು ಬಿನ್ನಹ

ಪ್ರತಿಷ್ಠಾನದ ಮುಂದೆ ಹಸ್ತಪ್ರತಿಗಳ ರಕ್ಷಣೆ, ಡಿಜಿಟೀಕರಣ ಮತ್ತು ಅಧ್ಯಯನ, ಮಾಧ್ಯಮ ಕನ್ನಡ ಬರವಣಿಗೆಯ ಬಗೆಗಿನ ಸ್ನಾತಕೋತ್ತರ ಡಿಪ್ಲೊಮ ತರಗತಿಗಳನ್ನು ನಡೆಸುವುದು, ನಮ್ಮ ಹಿರಿಯ ಸಂಶೋಧಕರ ಬಗ್ಗೆ ಸಾಕ್ಷ್ಯಚಿತ್ರಗಳನ್ನು ತಯಾರಿಸುವ ಯೋಜನೆ, ಮೌಲಿಕ ಪುಸ್ತಕಗಳ ಪ್ರಕಟಣೆ , ಹಳಗನ್ನಡದ ವಿಶೇಷ ಅಧ್ಯಯನಕ್ಕಾಗಿ ವಿಶೇಷ ಕಾರ್ಯಕ್ರಮಗಳನ್ನು ರೂಪಿಸುವುದುಇಂತಹ ಹಲವಾರು ಯೋಜನೆಗಳು ಮುಂದಿವೆ. ಇವಕ್ಕೆಲ್ಲ ಹಣದ ಆವಶ್ಯಕತೆ ಇದೆ. ಈ ದಿಸೆಯಲ್ಲಿ ಪ್ರತಿಷ್ಠಾನವು ಒಂದು ಶಾಶ್ವತ ನಿಧಿಯನ್ನು ಸ್ಥಾಪಿಸುವ ಆಲೋಚನೆಯಲ್ಲಿದೆ.ಈ ನಿಧಿಯ ಮೇಲಿನ ಬಡ್ಡಿ ಹಣದಿಂದ ನಮ್ಮ ಮುಂದಿನ ಯೋಜನೆಗಳನ್ನು ಕಾರ್ಯಗತಗೊಳಿಸುವುದು ನಮ್ಮ ಉದ್ದೇಶವಾಗಿರುತ್ತದೆ.ನಮ್ಮ ಉದ್ದೇಶ ಸಾಕಾರಗೊಳ್ಳಲು ತಮ್ಮಂತಹ ಉದಾರಿಗಳ ನೆರವು ಅಗತ್ಯ.

ತಮ್ಮಲ್ಲಿ ವಿಶೇಷವಾಗಿ ಮಾಡುವ ಮನವಿಯೆಂದರೆ, ತಾವು ಉದಾರವಾಗಿ ದಾನದ ರೂಪದಲ್ಲಿ ನಮ್ಮ ಸಂಸ್ಥೆಗೆ ಧನಸಹಾಯ ಮಾಡಬೇಕೆಂದು ತಮ್ಮನ್ನು ಕೋರುತ್ತೇವೆ. ತಮ್ಮಂತಹವರು ನಮ್ಮ ಚಟುವಟಿಕೆಗಳಿಗೆ ಬೆಂಬಲ ನೀಡಿದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರ ಮತ್ತಷ್ಟು ಶ್ರೀಮಂತವಾಗಲು ಸಾಧ್ಯವಾಗಬಹುದಾಗಿರುತ್ತದೆ.

ತಾವು ದತ್ತಿನಿಧಿಗಳನ್ನು ಸ್ಥಾಪಿಸುವ ಮೂಲಕ, ಶಾಶ್ವತ ನಿಧಿಗೆ ಉದಾರವಾಗಿ ಧನಸಹಾಯ ಮಾಡುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳನ್ನು ಖರೀದಿಸುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳ ಪ್ರಾಯೋಜಕತ್ವವನ್ನು ವಹಿಸಿಕೊಳ್ಳುವುದರ ಮೂಲಕ ಹಲವು ವಿಧಗಳಲ್ಲಿ ನಮ್ಮ ಜೊತೆ ಕೈ ಜೋಡಿಸಬಹುದಾಗಿರುತ್ತದೆ. ಪ್ರತಿಷ್ಠಾನಕ್ಕೆ ನೀಡುವ ನಿಧಿಯ ಮೊಬಲಗಿನ ಮೇಲೆ ಭಾರತ ಸರ್ಕಾರದ ಆದಾಯ ತೆರಿಗೆ ಕಾನೂನಿನ '80 ಜಿ' ಅನ್ವಯ ತೆರಿಗೆ ವಿನಾಯಿತಿ ದೊರೆಯುತ್ತದೆ.

ತಾವು ತಮ್ಮ ಕಾಣಿಕೆಗಳನ್ನು ಚೆಕ್/ಡಿಡಿ ಮೂಲಕ ಪ್ರತಿಷ್ಠಾನದ ಹೆಸರಿನಲ್ಲಿ ಪ್ರತಿಷ್ಠಾನದ ವಿಳಾಸಕ್ಕೆ ರವಾನಿಸಬಹುದು.

ಶಾಶ್ವತ ನಿಧಿಗೆ ಮೇ 2015 ರಲ್ಲಿ ಕಾಣಿಕೆ ನೀಡಿರುವವರ ಪಟ್ಟಿ:
ಪ್ರೊ.ಎಂ ಎಚ್ ಕೃಷ್ಣಯ್ಯ, ಶ್ರೀ ರಾನಂ ಚಂದ್ರಶೇಖರ್,
ಡಾ.ಜಯಮ್ಮ ಕರಿಯಣ್ಣ, ಡಾ|| ಪಿ.ವಿ. ನಾರಾಯಣ,
ಪ್ರೊ|| ಕೆ.ಎಂ. ಸೀತಾರಾಮಯ್ಯ, ಕನ್ನಡ ಗೆಳೆಯರ ಬಳಗ.
ಇಲ್ಲಿಯವರೆಗೆ ಸಂಗ್ರಹಿಸಲಾದ ಮೊತ್ತ ರೂ. 10.83 ಲಕ್ಷ.

# ಸದಸ್ಯರ ಗಮನಕ್ಕೆ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು ಎಲ್ಲಾ ಸದಸ್ಯರ ವಿಳಾಸಗಳನ್ನು ಖಚಿತಪಡಿಸಿಕೊಂಡು ಈ ಮೈಲ್ ವಿಳಾಸ ಹಾಗೂ ಮೊಬೈಲ್ ದೂರವಾಣಿ ಸಂಖ್ಯೆ ಇವುಗಳನ್ನೂ ಒಳಗೊಂಡ ಪರಿಷ್ಕೃತ ವಿಳಾಸ ಮಾಹಿತಿಗಳನ್ನು ಡಿಜಿಟಲೀಕರಿಸುವ ಕೆಲಸವನ್ನು ಪ್ರಾರಂಭ ಮಾಡಿರುತ್ತದೆ. ಇದರಿಂದ ಪ್ರತಿಷ್ಠಾನದ ಚಟುವಟಿಕೆಗಳಲ್ಲಿ ಹೆಚ್ಚಿನ ದಕ್ಷತೆ ಹಾಗೂ ಮಿತವ್ಯಯ ಸಾಧಿಸಲು ಸಾಧ್ಯವಿರುತ್ತದೆ.ಪ್ರತಿಷ್ಠಾನದ ಎಲ್ಲಾ ಸದಸ್ಯರೂ ತಮ್ಮ ಈ ಮೈಲ್ ವಿಳಾಸ ಹಾಗೂ ಮೊಬೈಲ್ ದೂರವಾಣಿ ಸಂಖ್ಯೆ ಇವುಗಳನ್ನೂ ಒಳಗೊಂಡ ವಿಳಾಸಗಳನ್ನು ಪ್ರತಿಷ್ಠಾನದ ಕಚೇರಿಗೆ ಈ ಕೆಳಕಂಡ ಯಾವುದೇ ರೀತಿಯಲ್ಲಿ ತಲುಪಿಸಬೇಕೆಂದು ಕೋರುತ್ತೇವೆ:

1. ಒಂದು ಪೋಸ್ಟ್ ಕಾರ್ಡ್ ನಲ್ಲಿ ಎಲ್ಲಾ ವಿವರಗಳನ್ನು ಬರೆದು ಕಳುಹಿಸುವುದು
2. ಪ್ರತಿಷ್ಠಾನದ ಈ ಮೈಲ್ ವಿಳಾಸಕ್ಕೆ ಎಲ್ಲಾ ವಿವರಗಳನ್ನು ಕಳುಹಿಸುವುದುbmsritrust@gmail.com
3. ಪ್ರತಿಷ್ಠಾನದ ಕಚೇರಿಗೆ ದೂರವಾಣಿ ಕರೆ ಮಾಡಿ ವಿವರಗಳನ್ನು ನೀಡುವುದು 080 26615877
4. ಪ್ರತಿಷ್ಠಾನದ ಕಚೇರಿಗೆ ಭೇಟಿ ನೀಡಿದಾಗ ವಿವರಗಳನ್ನು ನೀಡುವುದು

ದಯವಿಟ್ಟು ಗಮನಿಸಿ: ಹಾಲಿ ನಿಯಮಗಳ ಪ್ರಕಾರ ಸದಸ್ಯತ್ವ ಗುರುತಿನ ಕಾರ್ಡ್ ಇಲ್ಲದೇ ಪ್ರತಿಷ್ಠಾನದ ಸರ್ವ ಸದಸ್ಯರ ಸಭೆಯ ಕಲಾಪಗಳಲ್ಲಿ ಭಾಗವಹಿಸಲು ಅನುಮತಿ ಇರುವುದಿಲ್ಲ. ಆದ್ದರಿಂದ ಪ್ರತಿಷ್ಠಾನದ ಸದಸ್ಯತ್ವದ ಗುರುತಿನ ಕಾರ್ಡ್ ನ್ನು ಪಡೆಯದಿರುವಂತಹ ಸದಸ್ಯರು ಶೀಘ್ರವಾಗಿ ಪಡೆದುಕೊಳ್ಳಬೇಕೆಂದು ಕೋರಲಾಗಿದೆ.

### ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣ
**www.bmshri.org**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣವನ್ನು ಪುನರ್ ರೂಪಿಸಲಾಗಿರುತ್ತದೆ.ಕನ್ನಡ ಗಣಕ ಪರಿಷತ್ತು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣವನ್ನು ನವೀಕರಿಸುವ ಕೆಲಸವನ್ನು ಪ್ರಾರಂಭಿಸಿದ್ದು ಈಗಾಗಲೇ ಹಲವಾರು ನೂತನ ಸೌಲಭ್ಯಗಳನ್ನು ಅಳವಡಿಸಿರುತ್ತಾರೆ. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣ ವಿಶ್ವದಾದ್ಯಂತ ಕನ್ನಡ ಅಧ್ಯಯನ ಮಾಡುವ ಎಲ್ಲರಿಗೂ ಉತ್ತಮ ಸಂಪನ್ಮೂಲಗಳ ಕಣಜವಾಗಿರುವಂತೆ ಮಾಡಲು ವಿಶೇಷ ಶ್ರಮ ವಹಿಸಲಾಗುತ್ತಿದೆ.ಶೀಘ್ರದಲ್ಲಿ ಹಲವಾರು ನೂತನ ಶೈಲಿಯ ಸೌಲಭ್ಯಗಳನ್ನು ಈ ಜಾಲತಾಣದಲ್ಲಿ ಕಾಣಬಹುದು.

# ಪ್ರತಿಷ್ಠಾನದ ಹೊಸ ನಿಯತ ಕಾರ್ಯಕ್ರಮ

## 'ಅಕ್ಕರ ಗೊಟ್ಟಿ'

**ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ**
**ಸ್ಥಳ : ಶಾ. ಬಾಲೂರಾವ್ ಮಾತಿನ ಮನೆ**
**ಎರಡನೆಯ ಮಹಡಿ, ಬಿಎಂಶ್ರೀ ಪ್ರತಿಷ್ಠಾನ**

**ಕಾರ್ಯಕ್ರಮದ ಸ್ವರೂಪ:**

1. ಇದು ಉಪನ್ಯಾಸ ಕಾರ್ಯಕ್ರಮವಲ್ಲ; ಪ್ರತಿಷ್ಠಾನವು ಯಾರನ್ನೂ ಅತಿಥಿಯಾಗಿ ಆಹ್ವಾನಿಸುವುದಿಲ್ಲ.
2. ಸಂಸ್ಕೃತಿಗೆ ಸಂಬಂಧಿಸಿದ ಯಾವುದೇ ವಿಷಯದ ಬಗ್ಗೆ ಒಬ್ಬರು ಆಸಕ್ತರು ತಾವಾಗಿ ಹತ್ತು-ಹದಿನೈದು ನಿಮಿಷಗಳಲ್ಲಿ ತಮ್ಮ ವಿಚಾರವನ್ನು ಮಂಡಿಸುತ್ತಾರೆ: ಅದರ ವಿಷಯವಾಗಿ ಒಂದು ಗಂಟೆಯವರೆಗೂ ಚರ್ಚೆ ಮುಂದುವರಿಯುತ್ತದೆ; ಚರ್ಚೆಯಲ್ಲಿ ಆಸಕ್ತರಾದ ಯಾರು ಬೇಕಾದರೂ ಭಾಗವಹಿಸಬಹುದು.
3. ಯಾರು ಬೇಕಾದರೂ ತಮಗೆ ಸೂಕ್ತವೆನಿಸಿದ ವಿಷಯವನ್ನು ಚರ್ಚೆಗೆ ಮಂಡಿಸಬಹುದು; ಆದರೆ ಕನಿಷ್ಠ ಒಂದು ತಿಂಗಳ ಮುಂಚೆ ವಿಷಯವನ್ನು ಪ್ರತಿಷ್ಠಾನದ ಕಾರ್ಯದರ್ಶಿಗಳಿಗೆ ತಿಳಿಸಬೇಕು. ಚರ್ಚೆಯಲ್ಲಿ ಪಾಲುಗೊಳ್ಳುವವರಿಗಾಗಿ ಪ್ರತಿಷ್ಠಾನದ ಸೂಚನಾ ಫಲಕದಲ್ಲಿ ಹಾಗೂ ಪ್ರತಿ ತಿಂಗಳ ಮೊದಲಲ್ಲಿ ಪ್ರಕಟವಾಗುವ ವಾರ್ತಾಪತ್ರ 'ಹೊಂಗನಸು'ವಿನಲ್ಲಿ ತಿಳಿಯಪಡಿಸಲಾಗುವುದು
4. ಚರ್ಚೆಗೆ ಆರಿಸಿಕೊಳ್ಳುವ ವಿಷಯ ಸಂಸ್ಕೃತಿಗೆ ಸಂಬಂಧಿಸಿದ ಯಾವುದೇ ಆಗಿರಬಹುದು: ಸಾಹಿತ್ಯ, ಶಾಸನ, ಕಲೆ, ಸಿನಿಮ, ಸಂಗೀತ, ಇತಿಹಾಸ, ಮಾನವಿಕ – ಹೀಗೆ. ಗೊಟ್ಟಿಯಲ್ಲಿ ನಡೆಯುವ ಚರ್ಚೆಯನ್ನು ಧ್ವನಿಮುದ್ರಿಸಿಕೊಂಡು ಯೂಟ್ಯೂಬ್‌ನಲ್ಲಿಯೂ ಹಾಕಲಾಗುವುದು.
5. ಪ್ರತಿ ತಿಂಗಳೂ ಎರಡನೆಯ ಶನಿವಾರ ಸಂಜೆ 6–00 ಗಂಟೆಗೆ ಕಾರ್ಯಕ್ರಮ ಆರಂಭ

ಶಾ. ಬಾಲೂರಾವ್ ಮಾತಿನ ಮನೆ
2 ನೇ ಮಹಡಿ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

ಬಿಎಂಶ್ರೀ ಯವರ ಮೊಮ್ಮಗಳು ಶ್ರೀಮತಿ ಕಮಲಿನಿ ಶಾ ಬಾಲೂರಾವ್ ರವರು ನೀಡಿದ ದಾನದ ಮೊತ್ತದಿಂದ ಬಿಎಂಶ್ರೀ ಪ್ರತಿಷ್ಠಾನದ ಎರಡನೆಯ ಮಹಡಿಯಲ್ಲಿ "ಶಾ. ಬಾಲೂರಾವ್ ಮಾತಿನ ಮನೆ" ಯನ್ನು ಸ್ಥಾಪಿಸಲಾಗಿದೆ.

ಈ ಸಭಾಂಗಣದಲ್ಲಿ ಸಾಹಿತ್ಯಾಸಕ್ತರು ಔಪಚಾರಿಕ ಹಾಗೂ ಅನೌಪಚಾರಿಕ ಚರ್ಚೆಗಳನ್ನು ನಡೆಸಿ ಕನ್ನಡ ಸಾಹಿತ್ಯದಲ್ಲಿ ಹೊಸತನವನ್ನು ಕಾಣುವ ಹಾಗೂ ಹೊಸತನವನ್ನು ತರುವ ಪ್ರಯತ್ನಗಳನ್ನು ಮಾಡುವ ಕೆಲಸ ಆಗಬೇಕೆಂದು ಆಶಯವಿದೆ. ಬಿಎಂಶ್ರೀ ಪ್ರತಿಷ್ಠಾನವು ಈ ನಿಟ್ಟಿನಲ್ಲಿ ಹೆಜ್ಜೆಯನ್ನಿಟ್ಟು ಹೊಸ ರೀತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುತ್ತದೆ. **ಕನ್ನಡ ಪರ ಸಂಘ ಸಂಸ್ಥೆಗಳು ಹಾಗೂ ಸಾಹಿತ್ಯಾಸಕ್ತರು ಸಾಹಿತ್ಯ ಸಂಬಂಧಿತ ಚಟುವಟಿಕೆಗಳನ್ನು ನಡೆಸಲು ಈ ಸಭಾಂಗಣವನ್ನು ಬಹು ಸುಲಭ ದರಗಳಲ್ಲಿ ಪಡೆಯಬಹುದಾಗಿರುತ್ತದೆ. ಸುಮಾರು 50 ಜನರು ಕುಳಿತು ಚರ್ಚೆ ನಡೆಸಬಹುದಾಗಿರುತ್ತದೆ. ಇತರ ವಿವರಗಳಿಗೆ ಪ್ರತಿಷ್ಠಾನದ ಕಚೇರಿಯನ್ನು ಸಂಪರ್ಕಿಸಿರಿ.**

---

## ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನವು ಪ್ರಕಟಿಸಿರುವ ಪುಸ್ತಕಗಳ ಕಿರು ಪರಿಚಯ

ಸತ್ಯ ನಾರಾಯಣರಾವ್ (ಹೂ. ರಾ) ಸಂ.
**ಕವಿಗಳು ಕಂಡ ಬಿ.ಎಂ.ಶ್ರೀ : ವಿವಿಧ ಕವಿಗಳ ಕವನ ಸಂಕಲನ**
ಪು.xii+100 ಬೆಲೆ ರೂ 80/– 2012

ಆಚಾರ್ಯ ಬಿ.ಎಂ.ಶ್ರೀ ಯವರ ಮೇರು ವ್ಯಕ್ತಿತ್ವ, ಪಾಂಡಿತ್ಯ, ಸೃಜನ ಶೀಲತೆ, ಕಲ್ಪನಾಶ್ರೀಮಂತಿಕೆ, ಅಸಾಧಾರಣ ಸಾಹಿತ್ಯ ಸೃಷ್ಟಿ ಅನುಪಮ, 'ಶ್ರೀ'ಯವರು ಬರೆದದ್ದು ಕಡಿಮೆ ಆದರೆ ಅವರ ಕಾವ್ಯ, ನಾಟಕ, ಗದ್ಯ ಬರಹ, ಮುಂದಿನ ವೇಳೆಗೆ ಮಾರ್ಗದರ್ಶಿಯಾಗಿತ್ತು. 'ಬಿ. ಎಂ.ಶ್ರೀ ಯವರನ್ನು ಕುರಿತು ಹಿರಿಯ ಕಿರಿಯ ಕವಿಗಳಿಂದ ರಚಿತವಾದ ಆಯ್ದ ಅತಿ ಕವನಗಳ ಸಂಗ್ರಹ ಈ ಕೃತಿ.

ಲಿಂಗಯ್ಯ ಡಿ
**ಕನ್ನಡ ನವೋದಯ ಪ್ರವರ್ತಕ ಬಿ.ಎಂ. ಶ್ರೀಕಂಠಯ್ಯ: ವ್ಯಕ್ತಿ ಪರಿಚಯ ಮತ್ತು ಸೂಕ್ತಗಳು (ಎರಡನೇ ಮುದ್ರಣ) [ಪ್ರಥಮ ಮುದ್ರಣ 2005]**
ಪು.50 ಬೆಲೆ ರೂ. 30/– 2012

ಬಿ. ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಬೆಳ್ಳೂರು ಶಾಖೆಯ ಮಹಾಪೋಷಕರಾದ ಶ್ರೀ ಶ್ರೀಶ್ರೀ ಬಾಲಗಂಗಾಧರನಾಡು ಸ್ವಾಮಿಯವರ ಆಶಯದಂತೆ ರಚಿಸಿರುವ ಕಿರು ಪುಸ್ತಕ ಇದು. ಬಿ. ಎಂ.ಶ್ರೀಯವರನ್ನು ಕುರಿತು ಸಂಕ್ಷಿಪ್ತವಾದ ವಿದ್ವತ್ ಪೂರ್ಣ ಲೇಖನವಲ್ಲದೆ. ಅವರ ಆಯ್ದ ಸೂಕ್ತಗಳು ಜೀವನದ

ಮೈಲಿಗಲ್ಲುಗಳು ಹಾಗೂ ಅವರ ಕೃತಿಗಳ ಮಾಹಿತಿ ಒದಗಿಸಲಾಗಿದೆ.

**ಶ್ರೀ ಕೃಷ್ಣ ದೇವರಾಯನ ದಿನಚರಿ.**
**(ಪ್ರಧಾನ ಸಂಪಾದಕರು : ಎಂ. ವಿ. ಸೀತಾರಾಮಯ್ಯ)**
ಪು.92 ಬೆಲೆ ರೂ. 80/- 2013
ದೇಶದ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಇತಿಹಾಸ ರಚನೆಯಲ್ಲಿ ಶಿಲಾಶಾಸನಗಳು, ನಾಣ್ಯಗಳು, ಮಾಸ್ತಿ ವೀರಗಲ್ಲುಗಳು, ತಾದವೋಲೆ, ಭೂಜಗ ಪತ್ರ, ಪ್ರಾಚೀನ ಹಸ್ತ ಪ್ರತಿಗಳು, ಬಖೈರುಗಳೂ ಇತ್ಯಾದಿಗಳ ಪಾತ್ರ ಗುರುತರವಾದದ್ದು, ವಿಜಯನಗರ ಕೃಷ್ಣ ದೇವರಾಯನ ದಿನಚರಿಯ ವಿವರಗಳನ್ನು ತಾಳೆಗರಿ ಹಸ್ತ ಪ್ರತಿಯಲ್ಲಿ ನಮೂದಿಸ ಲಾಗಿತ್ತು. ಇದನ್ನು ಮುಕ್ಕು ತಿಮ್ಮಯ್ಯಮತ್ತು ಮಾದಯ್ಯನವರ ಮಲ್ಲಯ್ಯ ಎಂಬುವರು ರಾಜಾಜ್ಞೆಯಂತೆ ಬರೆದಿದ್ದಾರೆ. ಲಿಪಿ ಮತ್ತು ಭಾಷೆಯಆಧಾರದ ಮೇಲೆ ಇದು ಬಹುಶಃ ಕ್ರಿ. ಶ. 16ನೇ ಶತಮಾನದ ಕನ್ನಡದಲ್ಲಿರುವ ತಾಳೆಯೋಲೆ ಗ್ರಂಥವೆನ್ನಬಹುದು. ಶ್ರೀ ರಾಮಾನುಜಾ ಚಾರ್ಯರ ವಂದನೆಯಿಂದ ಆರಂಭ ವಾಗುವ ಈ ಗ್ರಂಥದಲ್ಲಿಅರಸನ ದಿನ ನತ್ಯದ ಕಾರ್ಯಗಳನ್ನು ನಮೂದಿಸಲಾಗಿದೆ.

ಭಾಸ್ಕರ್ (ಎಂ.ಎಸ್)
**ಎಂ. ವಿ. ಸೀತಾರಾಮಯ್ಯ :ಜೀವನ ಮತ್ತು ಸಾಹಿತ್ಯ ಸಾಧನೆ**
ಪು.96 ಬೆಲೆ ರೂ. 50/- 2013
'ರಾಘವ'ಕಾವ್ಯನಾಮದಿಂದ ಪ್ರಸಿದ್ಧರಾದ ಮೈಸೂರು ವೆಂಕಟದಾಸಪ್ಪ ಸೀತಾರಾಮಯ್ಯನವರು ಆಧುನಿಕಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಸಾಹಿತಿಗಳಲ್ಲಿ ಅಗ್ರಗಣ್ಯರುಕಾವ್ಯ ಮೀಮಾಂಸೆ ಮತ್ತು ವ್ಯಾಕರಣ ಕ್ಷೇತ್ರಕ್ಕೆ ಅವರ ಕೊಡುಗೆ ಅವಿಸ್ಮರಣೀಯ ಎಂ. ವಿ.ಸೀ. ಅವರ ಶತಮಾನೋತ್ಸವ ಸಂದರ್ಭದಲ್ಲಿ ಅದರ ಕುರಿತದಂತೆ ವಿದ್ವಾಂಸರು, ಹಿತೈಷಿಗಳು ಹಾಗೂ ಶಿಷ್ಯರು ವಿಮರ್ಶಾತ್ಮಕ ಹಾಗೂ ವಿದ್ವತ್ಪೂರ್ಣ ಲೇಖನಗಳನ್ನು ಹಲವಾರು ದಿನ ಪತ್ರಿಕೆ, ಮಾಸ ಪತ್ರಿಕೆ ಇತ್ಯಾದಿಗಳಲ್ಲಿ ಪ್ರಕಟಿಸಿದ್ದರು ಇವುಗಳಲ್ಲಿ ಕೆಲವನ್ನ ಆಯ್ಕೆ ಮಾಡಿ, ಪ್ರಸ್ತುತ ಕೃತಿಯಲ್ಲಿ ಸಂಕಲಿಸಲಾಗಿದೆ ಅಂತಿಮ ಅಧ್ಯಾಯದಲ್ಲಿ ನೀಡಿರುವ ಎಂ. ವಿ.ಸೀ ಅವರಜೀವನ ಪಥ, ಸಾಹಿತ್ಯ ಕೃಷಿಯ ವಿವರಗಳು ಕನ್ನಡ ಸಾಹಿತ್ಯ ವಿದ್ಯಾರ್ಥಿಗಳಿಗೆ, ಸಂಶೋಧಕರಿಗೆ ಬಹುಉಪಯುಕ್ತ ಆಕರ ವಿವರಣೆ.

ಗೋವರ್ಧನ (ಸುಂಕಂ) ಮತ್ತು ಶ್ಯಾಮಲರತ್ನಕುಮಾರಿ

**ಹಸ್ತಪ್ರತಿಅಧ್ಯಯನ : ಸಮಾವೇಶ ಸಂಪುಟ 1**
ಪು.224 ರೂ. 100/- 2012
ಹಸ್ತ ಪ್ರತಿ ಎಂದರೆ ಕೈಬರಹ, ಪುಸ್ತಕ, ಗ್ರಂಥ ಎಂಬರ್ಥವಿದೆ, ಮುದ್ರಣ ಮಾಧ್ಯಮಇಲ್ಲದಾಗ ವಿದ್ವಾಂಸರುತಮ್ಮ ಚಿಂತನೆಗಳನ್ನು ಎಲೆ, ಕಾಗಿದಗಳ ಮೇಲೆ ಬರೆದರು, ಹಸ್ತ ಪ್ರತಿಗಳು ದೇಶದ ಸಾಂಸ್ಕೃತಿಕ ಸಂಸತ್ತಿನ ಪ್ರತೀಕಗಳು ಎಂದರೆತಪ್ಪಾಗಲಾರದು ಮಾರ್ಚ್ 26, 2011 ರಂದುಉಜಿರೆಯಲ್ಲಿ ನಡೆದ ಪ್ರಥಮರಾಷ್ಟ್ರೀಯ ಹಸ್ತಪ್ರತಿ ಸಮಾವೇಶದಲ್ಲಿ ಮಂಡಿತವಾದ 25 ಸಂಶೋಧನಾ ಪ್ರಬಂಧಗಳಲ್ಲಿ 23 ಲೇಖನಗಳು ಮಾತ್ರ ಈ ಸಂಪುಟದಲ್ಲಿ ಪ್ರಕಟವಾಗಿವೆ. ಇದುವರೆಗೂದೊರಕದೇಇದ್ದ ಹೊಸ ಹಸ್ತ ಪ್ರತಿಗಳನ್ನು ಪರಿಚಯಿಸಲಾಗಿದೆ. ಗ್ರಂಥ ಸಂಪಾದನೆಯ ಕಾರ್ಯದ ಬಗ್ಗೆ ವಿವೇಚಿಸಲಾಗಿದೆ ಲಿಪಿಯ ಬಗ್ಗೆ, ಚಿತ್ರಕಲೆಯ ಮಾಡಲಾಗಿದೆ ಹಿರಿಯಕಿರಿಯ ಸಂಶೋಧಕರಾ ಬರೆದಿರುವ ಈ ಲೇಖನಗಳು ಹಸ್ತಪ್ರತಿ ಅಧ್ಯಯನಾಭಿಲಾಷಿಗಳಿಗೆ ಸಾಕಷ್ಟು ಉಪಯುಕ್ತ ಮಾಹಿತಿ ಒದಗಿಸುತ್ತದೆ.

---

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath



ಅಚ್ಚಾದ ಪುಸ್ತಕ ತೆರೆದ-ಅಂಚೆ

ಶ್ರೀಮತಿ/ಶ್ರೀ..........................................

..........................................

..........................................

ವಿಳಾಸ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು - ೧೯
ದೂರವಾಣಿ : ೨೬೬೧೫೮೭೭